ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ವಿಜಯಪುರ/ಬಾಗಲಕೋಟೆ/ಬೆಳಗಾವಿ ಜಿಲ್ಲೆಗಳ ಅನುದಾನಿತ ಶಾಲಾ ಕಾಲೇಜುಗಳ ಬಗ್ಗೆ

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ):-

1420 (1744) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿಜಯಪುರ ಬಾಗಲಕೋಟೆ, ಬೆಳಗಾವಿ ಹಾಗೂ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಗಳ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ/ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಮುಂಬಡ್ತಿಗಾಗಿ ಬಂದ ಪ್ರಸ್ತಾವನೆಗಳು, 10,15,20,25,30, ವರ್ಷಗಳ ಕಾಲಮಿತಿ ಬಡ್ತಿಗಾಗಿ, ಪ್ರಾಚಾರ್ಯರ ಹುದ್ದೆಗೆ ಅನುಮತಿಗಾಗಿ ಬಂದ ಪ್ರಸ್ತಾವನೆಗಳ ಸಂಖ್ಯೆ ಎಷ್ಟು ; ಕಳೆದ 02 ವರ್ಷಗಳಲ್ಲಿ ಬಂದ ಪ್ರಸ್ತಾವನೆಗಳ ಸಂಖ್ಯೆ ಎಷ್ಟು ; (ಕಾಲೇಜುವಾರು, ಹುದ್ದೆವಾರು ವಿವರ ನೀಡುವುದು)

(ಆ) ಪ್ರಸ್ತಾವನೆಗಳು ಆಯಾ ಜಿಲ್ಲೆಗಳ ಉಪ ನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಬಂದ ದಿನಾಂಕ, ಕಡತ ಸೃಷ್ಠಿಯಾದ ದಿನಾಂಕ ಹಾಗೂ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಬಂದ ದಿನಾಂಕ, ಕಡತ ಸೃಷ್ಠಿಯಾದ ದಿನಾಂಕ ಹಾಗೂ ಆಯಾ ಕಾಲೇಜುಗಳ ಹುದ್ದೆಗಳನ್ನು ಭರ್ತಿ ಮಾಡಲು ಕೇಳಲಾದ ಮಾಹಿತಿಯ ವಿವರ ಹಾಗೂ ಎಷ್ಟು ಬಾರಿ ಮಾಹಿತಿಗಳನ್ನು ಕೇಳಲಾಗಿದೆ ಎಂಬುದರ ಮಾಹಿತಿಯ ವಿವರದೊಂದಿಗೆ ಒದಗಿಸುವುದು ;

(ಇ) ಪ್ರಸ್ತಾವನೆಗಳು ಇತ್ಯರ್ಥಗೊಂಡು ಅನುಮೋದನೆ ಅಥವಾ ಅನುಮತಿ ಆದೇಶ ನೀಡಲಾದ ದಿನಾಂಕವನ್ನು ಒದಗಿಸುವುದು; ಪ್ರಸ್ತುತ ಎಷ್ಟು ಕಡತಗಳು ಬಾಕಿ ಇವೆ ; ಯಾವ ಕಾರಣಕ್ಕಾಗಿ ಬಾಕಿ ಇವೆ ; ಯಾವ ಕಾಲಮಿಯೊಳಗೆ ಈ ಪ್ರಸ್ತಾವನೆಗಳಿಗೆ ಅನುಮತಿ ನೀಡಿ ಆದೇಶ ನೀಡಲಾಗುವುದು ?